# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 9 (43) |
| ಪರಿಷತ್ತಿನ ಸದಸ್ಯರು | | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 07.12.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ಎ.ಜಿ.ಪಿ.-9000 ವೃತ್ತಿ ಪದೋನ್ನತಿ ಪಡೆಯಲು ದಿನಾಂಕ: 11.07.2016ರ ಯು.ಜಿ.ಸಿ. ಮಾರ್ಗಸೂಚಿಯಂತೆ ಯು.ಜಿ.ಸಿ. ಪ್ರಾಯೋಜಕತ್ವದಲ್ಲಿ ಮತ್ತು ಕಾಲೇಜು ಶಿಕ್ಷಣ ವತಿಯಿಂದ ಗೊತ್ತುಪಡಿಸಿರುವ ಅನುಮೋದಿತ ಶಿಬಿರ/ ಕಾರ್ಯಗಾರ/ ತರಬೇತಿಗಳು ಮತ್ತು ತರಬೇತಿ ಸಂಸ್ಥೆಗಳ ವಿವರಗಳನ್ನು ಒದಗಿಸುವುದು. | ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಅಧಿಸೂಚನೆ ಸಂಖ್ಯೆ: ಎಫ್-1-2/2017 (EC/PS) ನಿಯಮ II ರಲ್ಲಿನ ಉಪ ನಿಯಮ (2) ರನ್ವಯ ಕಾಲೇಜುಗಳಲ್ಲಿ ಯು.ಜಿ.ಸಿ. ಪ್ರಾಯೋಜಕತ್ವದಲ್ಲಿ ಎಫ್.ಡಿ.ಪಿ. ಕಾರ್ಯಗಾರವನ್ನು ಹಮ್ಮಿಕೊಂಡು, ಅನ್ಯಕಾರ್ಯನಿಮಿತ್ತ ಮಂಜೂರು ಮಾಡಲು ಕಾಲೇಜುಗಳ ಪ್ರಾಂಶುಪಾಲರುಗಳಿಂದ ಕೋರಿಕೆ ಸಲ್ಲಿಸಿದ್ದಲ್ಲಿ, ಸದರಿ ಕಾರ್ಯಗಾರದಲ್ಲಿ ಭಾಗವಹಿಸುವ ಪ್ರಶಿಕ್ಷಣಾರ್ಥಿಗಳಿಗೆ ಇಲಾಖಾ ವತಿಯಿಂದ ಯಾವುದೇ ಭತ್ಯೆಗಳಿಲ್ಲದೆ ಸದರಿ ದಿನಗಳಿಗೆ ಅನ್ಯಕಾರ್ಯನಿಮಿತ್ತ ರಜೆಯನ್ನು ಮಂಜೂರು ಮಾಡಲಾಗುವುದು.<br>ಕಾಲೇಜು ಶಿಕ್ಷಣ ವತಿಯಿಂದ ಕೆಳಕಂಡಂತೆ ತರಬೇತಿಗಳನ್ನು ಹಮ್ಮಿಕೊಳ್ಳಲಾಗಿದೆ.<br>• ಎ.ಟಿ.ಐ: 2019-20ನೇ ಸಾಲಿನಲ್ಲಿ ಮೈಸೂರಿನ ಆಡಳಿತ ತರಬೇತಿ ಸಂಸ್ಥೆ ಇಲ್ಲಿ ವಿವಿಧ ವಿಷಯಗಳ ಬಗ್ಗೆ ಒಟ್ಟು 195 ಗ್ರೇಡ್-3 ಹಾಗೂ ಬಿ ಅಧಿಕಾರಿಗಳಿಗೆ ತರಬೇತಿ ನೀಡಲಾಗಿದೆ.<br>• ಉನ್ನತ ಶಿಕ್ಷಣ ಅಕಾಡೆಮಿ : ಅ) 2019-20ನೇ ಸಾಲಿನಲ್ಲಿ ಹೊಸದಾಗಿ ನೇಮಕಾತಿ ಹೊಂದಿದ ವಿವಿಧ ವಿಷಯಗಳ ಸಹಾಯಕ ಪ್ರಾಧ್ಯಾಪಕರುಗಳಿಗೆ, ಗ್ರಂಥಪಾಲಕರುಗಳಿಗೆ ಹಾಗೂ ಪ್ರಾಂಶುಪಾಲರುಗಳಿಗೆ ಉನ್ನತ ಶಿಕ್ಷಣ ಅಕಾಡೆಮಿ, ಧಾರವಾಡ ಇಲ್ಲಿ ವೃತ್ತಿ ಬುನಾದಿ ತರಬೇತಿಯನ್ನು ಹಮ್ಮಿಕೊಂಡಿದ್ದು, ಸದರಿ ತರಬೇತಿಗೆ ಒಟ್ಟು 680 ಪ್ರಶಿಕ್ಷಣಾರ್ಥಿಗಳನ್ನು ನಿಯೋಜಿಸಲಾಗಿದೆ.<br>ಆ) 2019-20 ನೇ ಸಾಲಿನಲ್ಲಿ ಕಾಲೇಜು ಇಲಾಖೆ 50 ಬೋಧಕೇತರ ಸಿಬ್ಬಂದಿಗಳಿಗೆ ಆಡಳಿತಾತ್ಮಕ ತರಬೇತಿಯನ್ನು ಹಮ್ಮಿಕೊಳ್ಳಲಾಗಿದೆ.<br>• ನಿಮ್ಹಾನ್ಸ್: ರಾಷ್ಟ್ರೀಯ ಸೇವ ಯೋಜನೆ, ರಾಜ್ಯ ಕೋಶ ಹಾಗೂ ನಿಮ್ಹಾನ್ಸ್ ಸಹಯೋಗದೊಂದಿಗೆ ಎನ್.ಎಸ್.ಎಸ್. ಯೋಜನಾಧಿಕಾರಿಗಳ ಮೂಲಕ "ಜೀವನ ಕೌಶಲ್ಯ" ತರಬೇತಿಯನ್ನು ಎಪಿಡೀಮಿಯಾಲಜಿ ವಿಭಾಗ, ಜನ ಆರೋಗ್ಯ ಕೇಂದ್ರ, ನಿಮ್ಹಾನ್ಸ್ ಸಂಸ್ಥೆ, ಬೆಂಗಳೂರು ಇಲ್ಲಿ ಬೋಧಕರು/ಗ್ರಂಥಪಾಲಕರುಗಳಿಗೆ ಒಟ್ಟು 400 ಶಿಬಿರಾರ್ಥಿಗಳಿಗೆ ತರಬೇತಿಯನ್ನು ಹಮ್ಮಿಕೊಳ್ಳಲಾಗಿದೆ.<br>• ವಿತ್ತೀಯ ಆರ್ಥಿಕ ನೀತಿ ಸಂಸ್ಥೆ, ಬೆಂಗಳೂರು ಇಲ್ಲಿ ವಿವಿಧ ವಿಷಯಗಳ ಬಗ್ಗೆ ಎ ಮತ್ತು ಬಿ ಗುಂಪಿನ ಒಟ್ಟು 36 ಅಧಿಕಾರಿಗಳಿಗೆ ತರಬೇತಿಯನ್ನು ನೀಡಲಾಗಿದೆ. |
| ಆ) | ದಿನಾಂಕ:11.07.2016 ಯು.ಜಿ.ಸಿ. ಮಾರ್ಗಸೂಚಿಗಳನ್ವಯ AICTE ಪಾಯೋಜಿತ Engineering ಶಿಕ್ಷಣ ಸಂಸ್ಥೆಗಳಲ್ಲಿ ಕೈಗೊಳ್ಳುವ 7 ಅಥವಾ ಹೆಚ್ಚಿನ ದಿನಗಳು ನಡೆಸಲ್ಪಡುವ ಎಫ್.ಡಿ.ಪಿ. ತರಬೇತಿಗಳು ತರಬೇತಿಯನ್ನು ನೀಡಲು ಅರ್ಹತೆ ಪಡೆದಿರುವ / ಪಡೆಯದಿರುವ ಆದೇಶಗಳನ್ನು ಒದಗಿಸುವುದು. | ತಾಂತ್ರಿಕ ಶಿಕ್ಷಣ<br>AICTE ಪಾಯೋಜಿತ Engineering ಶಿಕ್ಷಣ ಸಂಸ್ಥೆಗಳಲ್ಲಿ 07 ಅಥವಾ ಹೆಚ್ಚಿನ ದಿನಗಳು ನಡೆಸಲ್ಪಡುವ ಎಫ್.ಡಿ.ಪಿ. ತರಬೇತಿಗಳನ್ನು ಎ.ಐ.ಸಿ.ಟಿ.ಇ. ನವದೆಹಲಿ ಇವರ ಮಾರ್ಗಸೂಚಿಗಳನ್ವಯ ನಡಸಲಾಗುವುದು.<br>2019-20 ಹಾಗೂ 2020-21 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯದಲ್ಲಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಒಂದು ಎಫ್.ಡಿ.ಪಿ. ತರಬೇತಿ ಕಾರ್ಯಕ್ರಮಕ್ಕೆ ಎ.ಐ.ಸಿ.ಟಿ.ಇ. ನವದೆಹಲಿ ಇವರು ಅನುಮೋದನೆ ನೀಡಿದ ಸಲುವಾಗಿ ಸದರಿ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಲಾಗಿದೆ. (ಅನುಬಂಧ-1ರಲ್ಲಿರಿಸಿದೆ)<br>College Name : GEC, Mosalehosahalli. |

| | | |
|---|---|---|
| | | Programme: Mechanical Engineering.<br>STTP Title : Light Weight Structures for Engineering Applications through Composite and Topology Optimization.<br>Duration : Two week<br>Year : 2019-20 |
| ಇ) | ಎ.ಜಿ.ಪಿ. 9000 ವೃತ್ತಿ ಪದೋನ್ನತಿ ನೀಡಲು ದಿ:10.10.2018ರಂದು ನಡೆದ ಪರಿಶೀಲನಾ ಸಮಿತಿಯ ಮುಂದೆ ಹಾಜರಾಗಿದ್ದ ಸಹಾಯಕ ಪ್ರಾಧ್ಯಾಪಕರುಗಳಲ್ಲಿ ತಿರಸ್ಕೃತಗೊಂಡಿರುವವರು ಯಾರು (ಮಾಹಿತಿಯನ್ನು ಒದಗಿಸುವುದು) | ಡಾ.ಟಿ. ಗಿರೀಶ್ ನಾಯ್ಕ್, ರಾಜ್ಯಶಾಸ್ತ್ರ, ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ ಇವರು AICTE ಪ್ರಾಯೋಜಿತತ್ವದಲ್ಲಿ Y.S.R. Engineering College of Yogi Vemana University, Praddatur, Andra Pradesh ಇಲ್ಲಿ ಏರ್ಪಡಿಸಲಾಗಿದ್ದ Faculty Development Programme ತರಬೇತಿಯಲ್ಲಿ ಭಾಗವಹಿಸಿರುತ್ತಾರೆ. AICTE ಆಯೋಜಿಸುವ ಶಿಬಿರ/ಕಾರ್ಯಕ್ರಮಗಳ ತರಬೇತಿಗಳನ್ನು ಈ ಇಲಾಖೆಯ ಉಪನ್ಯಾಸಕರ ವೃತ್ತಿ ಪದೋನ್ನತಿಗೆ ಪರಿಗಣಿಸುತ್ತಿಲ್ಲವಾದ್ದರಿಂದ ಸದರಿಯವರು ಸಲ್ಲಿಸಿರುವ ತರಬೇತಿಯ ಪ್ರಮಾಣ ಪತ್ರವನ್ನು ಪದೋನ್ನತಿಗೆ ಪರಿಗಣಿಸಿರುವುದಿಲ್ಲ. |
| ಈ) | ತಿರಸ್ಕೃತಗೊಂಡ ಸಹಾಯಕ ಪ್ರಾಧ್ಯಾಪಕರುಗಳು ಹಾಜರುಪಡಿಸಿದ್ದ ಎಫ್.ಡಿ.ಪಿ. ತರಬೇತಿ ಪ್ರಮಾಣ ಪತ್ರಗಳು, ಮತ್ತಿತರ ಕೋರ್ಸ್ ದಾಖಲೆಗಳನ್ನು ಪರಿಗಣಿಸುವ ಅಥವಾ ಪರಿಗಣಿಸದಿರುವ ಬಗ್ಗೆ ಯು.ಜಿ.ಸಿ.ಯಿಂದ ಪಡೆಯಲಾದ ಸ್ಪಷ್ಟೀಕರಣ ಏನು (ವಿವರಗಳನ್ನು ಒದಗಿಸುವುದು) | ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಸ್ಪಷ್ಟೀಕರಣವನ್ನು ಯುಜಿಸಿಯಿಂದ ಪಡೆದಿರುವುದಿಲ್ಲ. |
| ಉ) | ದಿನಾಂಕ: 10.10.2018 ರಂದು ನಡೆದ ಪರಿಶೀಲನಾ ಸಮಿತಿಯ ಮುಂದೆ ಹಾಜರಾಗಿದ್ದ ಸಹಾಯಕ ಪ್ರಾಧ್ಯಾಪಕರುಗಳು ಪ್ರಸ್ತಾವನೆಗಳನ್ನು ಸಲ್ಲಿಸುವ ಮುನ್ನ ಇಂತಹದ್ದೇ ರಿಫ್ರೆಶರ್ ಕೋರ್ಸ್ ಕಿರು ಅವಧಿಯ ಕೋರ್ಸ್‌ಗಳು ಮತ್ತು ಎಫ್.ಡಿ.ಪಿ ತರಬೇತಿಗಳ ಬಗ್ಗೆ ಸರ್ಕಾರ ನಿರ್ದಿಷ್ಟವಾಗಿ ಹೊರಡಿಸಿರುವ ಸುತ್ತೋಲೆಗಳನ್ನು ಒದಗಿಸುವುದು. | ರೂ. 9000/- ಎ.ಜಿಪಿಯನ್ನು ಯು.ಜಿ.ಸಿ ನಿಗಧಿಪಡಿಸಿರುವ ಮಾರ್ಗ ಸೂಚಿಗಳಂತೆ ಪರಿಶೀಲಿಸಬೇಕಾಗಿದ್ದು ಯುಜಿಸಿ ಯು ವರ್ಷವಾರು ರಿಫ್ರೇಶರ್ ಕೋರ್ಸ್ ಕಿರು ಅವಧಿಯ ಕೋರ್ಸ್‌ಗಳು ಮತ್ತು ಎಫ್‌ಡಿಪಿ ತರಬೇತಿಗಳ ನಡೆಸಲು ವಿಶ್ವವಿದ್ಯಾಲಯದ ಹೆಚ್.ಆರ್.ಡಿ.ಸಿ ಗೆ ಅನುಮತಿ ನೀಡುತ್ತದೆ. ಸದರಿ ಸಂಸ್ಥೆಗಳಿಂದ ನಡೆಸಲ್ಪಡುವ ಕೋರ್ಸ್‌ಗಳನ್ನು ಪದೋನ್ನತಿಗೆ ಪರಿಗಣಿಸಲಾಗುತ್ತದೆ. |

**(ಡಾ: ಅಶ್ವಥ್ ನಾರಾಯಣ ಸಿ.ಎನ್.)**
ಉಪ ಮುಖ್ಯಮಂತ್ರಿ (ಉನ್ನತ ಶಿಕ್ಷಣ)

**ಇಡಿ 220 ಡಿಸಿಇ 2020**